ಯಾವ ಮನುಷ್ಯನು ಈ ಮಹಾಭಾರತವನ್ನು ನಿತ್ಯವೂ ಕೇಳುವನೋ ಅಥವಾ ನಿತ್ಯವೂ ಪ್ರವಚನ ಮಾಡುವನೋ ಅವನು ಎಲ್ಲ ಪಾಪಗಳಿಂದ ಬಿಡುಗಡೆಯನ್ನು ಪಡೆದು, ಭಗವಂತನ ಪಾದಗಳನ್ನು ಪಡೆಯಬಲ್ಲನು. ಅಂತಹ ವ್ಯಕ್ತಿಯು ಹಿಂದಿನ ಹನ್ನೊಂದು ತಲೆಮಾರಿನ ಪಿತೃಗಳನ್ನು ಉದ್ಧರಿಸುವನು. ಜೊತೆಗೆ ಪುತ್ರರಿಂದ ಕೂಡಿದ ತನ್ನನ್ನೂ, ತನ್ನ ಸ್ತ್ರೀಯರನ್ನೂ ಉದ್ಧರಿಸುವನು. ಹೇ ನರಾಧಿಪತಿಯಾದ ಭರತಶ್ರೇಷ್ಠನೇ, ಈ ಪ್ರವಚನಕಾಲದಲ್ಲಿ ಹತ್ತನೆಯ ಒಂದಂಶ ಹೋಮವನ್ನೂ ಮಾಡಬೇಕು. ಹೇ ನರಶ್ರೇಷ್ಠನೇ, ನೀನು ಏನೆಲ್ಲವನ್ನು ಕೇಳಿರುವೆಯೋ ಆ ಎಲ್ಲವನ್ನೂ ನಿನ್ನ ಮುಂದೆ ನಾನಿಂದು ಹೇಳಿರುವೆನು.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಮ್ ಸ್ವರ್ಗಾರೋಹಣಪರ್ವಣಿ ಷಷ್ಠೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಸ್ವರ್ಗಾರೋಹಣಪರ್ವದಲ್ಲಿ ಆರನೆಯ ಅಧ್ಯಾಯ ಮುಗಿಯಿತು.

**॥ ಸಮಾಪ್ತಂ ಸ್ವರ್ಗಾರೋಹಣಪರ್ವ ॥**

**॥ ಸಮಾಪ್ತಂ ಮಹಾಭಾರತಮ್ ॥**

॥ ಶ್ರೀಮಧ್ವಾಂತರ್ಗತ ಶ್ರೀಕೃಷ್ಣಾರ್ಪಣಮಸ್ತು ॥

॥ ಹರಿಃಪ್ರಿಯತಾಮ್ ॥

★ ★ ★ ★ ★

ಯೋಗೋಶತಂಕನಕಶೃಂಗಮಯಂದದಾತಿ
ವಿಪ್ರಾಯ ವೇದವಿದುಷೇ ಸುಬಹುಶ್ರುತಾಯ ।
ಪುಣ್ಯಾಂ ಚ ಭಾರತಕಥಾಂ ಸತತಂ ಶೃಣೋತಿ
ತುಲ್ಯಂ ಫಳ ಭವತಿತಸ್ಯ ಚ ತಸ್ಯ ಚೈವ ॥

ಯಾವನು ವೇದಜ್ಞಾನಿಯಾದ, ಒಳ್ಳೆಯ ರೀತಿಯಿಂದ ಬಹುಶಾಸ್ತ್ರಾಧ್ಯಯನವನ್ನು ನಡೆಸಿದ ಬ್ರಾಹ್ಮಣನಿಗೆ ನೂರು ಗೋವುಗಳನ್ನು ಶೃಂಗಗಳಿಗೆ ಚಿನ್ನವನ್ನು ಮುಚ್ಚಿ, ದಾನ ಮಾಡುವನೋ ಅವನಿಗೂ, ಯಾವನು ಸತತವಾಗಿ ಪುಣ್ಯಪ್ರದವಾದ ಮಹಭಾರತದಕಥೆಯನ್ನು ಕೇಳುವನೋ ಅವನಿಗೂ ಸಮಾನವಾದ ಫಲವು ಲಭಿಸುವುದು.

ISBN: 978-93-88813-41-9